ಡಬ್ಲ್ಯು.ವಿ.ಎಸ್.ನರಸಿಂಹಮ್ *

# ಬಯಕಾರ ರಾಮಪ್ಪನ ೧೬ನೇ ಶತಮಾನದ ಕೆಲವು ಹೊಸ ಶಾಸನಗಳು

ಭಾರತೀಯ ಪುರಾತತ್ತ್ವ ಸರ್ವೇಕ್ಷಣ ಇಲಾಖೆಯ ಪರವಾಗಿ ನಡೆಸಿದ ಕ್ಷೇತ್ರ ಕಾರ್ಯದಲ್ಲಿ ಹೊಸಪೇಟೆ ತಾಲೂಕು ಮರಿಯಮ್ಮನ ಹಳ್ಳಿ ಫಿರ್ಕಾದಲ್ಲಿಯ ಐದು ಗ್ರಾಮಗಳಲ್ಲಿ, ಆ ಗ್ರಾಮಗಳ ಕೆರೆ ಕೋಡಿಯ ಹತ್ತಿರ ಕೆರೆಗಳ ಬಗ್ಗೆ ವಿವರಿಸುವ ಐದು ಅಪ್ರಕಟಿತ ಶಾಸನಗಳು ನನಗೆ ಕಂಡು ಬಂದಿವೆ. ಆ ಶಾಸನಗಳು ಬಯಕಾರ ರಾಮಪ್ಪನೆಂಬುವ ಒಬ್ಬನೇ ವ್ಯಕ್ತಿಯು, ಅವರ ರಕ್ತ ಸಂಬಂಧಿಕರ ಹೆಸರಿನಲ್ಲಿ ಅವರಿಗೆ ಪುಣ್ಯವಾಗಬೇಕೆಂದು ಶಕ ವರ್ಷ ೧೪೬೧ (ಕ್ರಿ.ಶ. ೧೫೩೯)ರಲ್ಲಿ ಕಟ್ಟಿಸಿದ ಕೆರೆಗಳ ಪ್ರಸ್ತಾವನೆ ಇದೆ. ಪ್ರತಿಯೊಂದು ಶಾಸನದಲ್ಲಿ ಎರಡು ಭಾಗಗಳಿದ್ದು, ಮೊದಲನೆಯ ಭಾಗದಲ್ಲಿ ಕೆರೆಯ ಬಗ್ಗೆ ವಿವರಗಳು ಕನ್ನಡದಲ್ಲಿದೆ. ಎರಡನೆಯ ಭಾಗದಲ್ಲಿ ಬಯಕಾರ ರಾಮಪ್ಪನ ವಂಶಾವಳಿ ಮತ್ತು ಅವನ ಧರ್ಮ ಕಾರ್ಯಗಳ ವಿವರಣೆ ಇದೆ. ಎಲ್ಲಾ ಶಾಸನಗಳ ಎರಡನೆಯ ಭಾಗವು ಒಂದೇ ಮಾದರಿಯಲ್ಲಿ ಇದ್ದು ಕನ್ನಡ ಲಿಪಿಯಲ್ಲಿ ಬರೆದ ಸಂಸ್ಕೃತ ಭಾಷೆಯನ್ನು ಕಾಣಬಹುದು.

ಬಯಕಾರ ರಾಮಪ್ಪನು ಅಚ್ಯುತದೇವರಾಯನ ಕಾಲದಲ್ಲಿ ಕೊಂಡವೀಡು ರಾಜ್ಯದ ಅಧಿಪತಿಯಾಗಿದ್ದನು. ಶಾಸನಗಳು ಎರಡನೇ ಭಾಗವಾದಂತಹ ಪ್ರಶಸ್ತಿಯಲ್ಲಿ ಈತ ಕೆಲವು ಬ್ರಾಹ್ಮಣ ಅಗ್ರಹಾರಗಳನ್ನು ಸ್ಥಾಪಿಸಿದನೆಂದು, ಅವುಗಳಲ್ಲಿ ದೇವಸ್ಥಾನಗಳನ್ನು, ಕೆರೆಗಳನ್ನು ಕಟ್ಟಿಸಿದನೆಂದು ತಿಳಿದು ಬರುತ್ತದೆ.

ಈತ ಒಟ್ಟು ೧೬ ಕೆರೆಗಳನ್ನು ಕಟ್ಟಿಸಿದನಂತೆ, ಅವುಗಳು ಈ ರೀತಿಯಾಗಿವೆ:

೧ ಬಾಚ ಸಮುದ್ರಂ
೨ ರಾಮ ಸಮುದ್ರಂ
೩ ಅಕ್ಕ ಸಮುದ್ರಂ
೪ ಕಾಮ ಸಮುದ್ರಂ
೫ ಅಮ್ಮ ಸಮುದ್ರಂ
೬ ವೀರ ಸಮುದ್ರಂ
೭ ಅಚ್ಯುತೇಂದ್ರ ಸಮುದ್ರಂ
೮ ವೆಂಕಟೇಂದ್ರ ಸಮುದ್ರಂ
೯ ಪಿನಲಕ್ಕ ಸಮುದ್ರಂ
೧೦ ಚಿನತಿಪ್ಪ ಸಮುದ್ರಂ
೧೧ ಪೆದಲಕ್ಕ ಸಮುದ್ರಂ
೧೨ ಅಚ್ಯುತಮ್ಮ ಸಮುದ್ರಂ
೧೩ ಲಿಂಗಾಲಯ್ಯ ತಟಾಕಂ
೧೪ ವೆಂಕಟಯ್ಯ ತಟಾಕಂ
೧೫ ಪೆದತಿಮ್ಮ ಸಮುದ್ರಂ
೧೬ ಚಿನಬಾಚ ಸಮುದ್ರಂ

ಈವರೆಗೆ ಪ್ರಕಟಿತವಾದ ಬಯಕಾರ ರಾಮಪ್ಪನ ಶಾಸನಗಳಿಂದ ಈಗಾಗಲೇ ತಿಳಿದು ಬಂದ ಮಾಹಿತಿಗಳು:

ಸಂಡೂರು ತಾಲೂಕಿನ ಚಿಕ್ಕಕೆರೆಯಾಗಿನ ಹಳ್ಳಿಯ ಕೆರೆ, ಅವನ ತಾಯಿ ಹಿರಿಯ ಲಕ್ಕರಸಮ್ಮನಿಗೆ ಪುಣ್ಯವಾಗಬೇಕೆಂದು ಅವರ ಹೆಸರಿನಲ್ಲಿ ಕಟ್ಟಿಸಿದ ಹಿರಿಯಲಕ್ಕ ಸಮುದ್ರದ ಕೆರೆಯೆಂದು,[2] (ಕ್ರಿ.ಶ. ೧೫೩೯) ಸಂಡೂರು

* ಅಸಿಸ್ಟೆಂಟ್ ಆರ್ಕಿಯಲಾಜಿಸ್ಟ್, ಆರ್ಕಿಯಲಾಜಿಕಲ್ ಸರ್ವೆ ಆಫ್ ಇಂಡಿಯಾ, ಕಮಲಾಪುರ

1. ಎ.ಆರ್.ಐ.ಇ., ೧೯೧೫, ಭಾಗ II ಪ್ಯಾರಾ. ೫೧.ಮತ್ತು ಎಸ್.ಐ.ಐ., ಸಂಪುಟ IX, ಭಾಗ II ಸಂ. ೫೯೩ ಮತ್ತು ೬೬೦
2. ಎಸ್.ಐ.ಐ; ಸಂಪುಟ IX, ಭಾಗ II ಸಂ. ೫೯೩

ತಾಲೂಕಿನ ಹುಲಿಕುಂಟ ಗ್ರಾಮದ ಕೆರೆ, ಅವನ ಮಗಳು ಅಚ್ಯುತಮ್ಮನಿಗೆ ಪುಣ್ಯವಾಗಬೇಕೆಂದು ಆಕೆಯ ಹೆಸರಿನಲ್ಲಿ ಕಟ್ಟಿಸಿದ. ಅಚ್ಯುತಮ್ಮಸಮುದ್ರದ ಕೆರೆಯೆಂದು,[3] ಹೊಸಪೇಟೆ ತಾಲೂಕಿನ ಮಂಗಿಮಾವಿನಹಳ್ಳಿ ಶಾಸನದಿಂದ ಅವನ ಮಗಳು ಕಾಮಮ್ಮನಿಗೆ ಪುಣ್ಯವಾಗಬೇಕೆಂದು ಆಕೆಯ ಹೆಸರಿನಲ್ಲಿ ಕಟ್ಟಿಸಿದ ಕಾಮಸಮುದ್ರದ ಕೆರೆ ಎಂದು[4] (ಕ್ರಿ.ಶ.೧೫೪೪) ತಿಳಿದು ಬರುತ್ತದೆ.

ಮೇಲೆ ಕಂಡು ಬಂದ ಅಪ್ರಕಟಿತ ಶಾಸನಗಳಿಂದ ಬಯಕಾರ ರಾಮಪ್ಪನು ಕಟ್ಟಿಸಿದ ೧೬ ಕೆರೆಗಳಲ್ಲಿ ಇನ್ನು ನಾಲ್ಕು ಕೆರೆಗಳ ಬಗ್ಗೆ ವಿವರಗಳು ತಿಳಿದು ಬರುತ್ತದೆ. ಪೋತಲಕಟ್ಟಿ ಗ್ರಾಮದ ಕೆರೆ ಶಾಸನದಿಂದ ಅದು ಅವನ ಮಗ ಅಕಪ್ಪನಿಗೆ ಪುಣ್ಯವಾಗಬೇಕೆಂದು, ಅವನ ಹೆಸರಿನಲ್ಲಿ ಕಟ್ಟಿಸಿದ ಅಕಸಮುದ್ರದ ಕೆರೆ ಎಂದು (ಕ್ರಿ.ಶ.೧೫೩೯), ತಿಮ್ಮಲಾಪುರದ ಜಂಭಯ್ಯನಕೆರೆ ಶಾಸನದಿಂದ ಅದು ಅವನ ಚಿಕ್ಕಪ್ಪ ಬಾಚರಸಯ್ಯನಿಗೆ ಪುಣ್ಯವಾಗಬೇಕೆಂದು ಅವರ ಹೆಸರಿನಲ್ಲಿ ಕಟ್ಟಿಸಿದ ಬಾಚಸಮುದ್ರದ ಕೆರೆ ಎಂದು, (ಕ್ರಿ.ಶ.೧೫೩೯), ಒಂಟಿಗೋಡು ತಾಂಡದ ಕೆರೆ ಶಾಸನದಿಂದ ಅದು ಅವನ ಹೆಂಡತಿ ವೀರಮ್ಮನಿಗೆ ಪುಣ್ಯವಾಗಬೇಕೆಂದು ಅವರ ಹೆಸರಿನಲ್ಲಿ ಕಟ್ಟಿದ ವೀರಸಮುದ್ರದ ಕೆರೆ ಎಂದು (ಕ್ರಿ.ಶ.೧೫೩೯), ಮತ್ತು ನಂದಿಬಂಡೆಯ ಕೆರೆಯ ಶಾಸನದಿಂದ ಅದು ಅವನ ತಂದೆ ಹಿರಿಯ ತಿಮ್ಮರಸಯ್ಯನಿಗೆ ಪುಣ್ಯವಾಗಬೇಕೆಂದು ಅವರ ಹೆಸರಲ್ಲಿ ಕಟ್ಟಿಸಿದ ತಿಮ್ಮಸಮುದ್ರದ ಕೆರೆ (ಕ್ರಿ.ಶ.೧೫೩೯) ಎಂದು ತಿಳಿದುಬರುತ್ತದೆ.

ಹೊಸಪೇಟೆ ತಾಲೂಕಿನ ಹರಪನಹಳ್ಳಿಯ ಮಾರುತಿ ಕೆರೆಯ ಸಮೀಪ ದೊರೆತ ಶಾಸನದ ಮೇಲ್ಭಾಗವು ತುಂಡಾಗಿದ್ದು ಕೆಳಭಾಗದ ೧೯ ಸಾಲುಗಳು ಮಾತ್ರ ಲಭ್ಯವಿರುವುದರಿಂದ ಅ ಶಾಸನದಿಂದ ಆ ಕೆರೆಯ ಕುರಿತು ಮಾಹಿತಿಗಳು ತಿಳಿದು ಬರುತ್ತಾ ಇಲ್ಲ.

ಬಯಕಾರ ರಾಮಪ್ಪನ ವಂಶಾವಳಿ ಬಗ್ಗೆ ಎರಡು ವಿಷಯಗಳು ಬೆಳಕಿಗೆ ಬರುತ್ತಿವೆ. ಒಂಟಿಗೋಡು ತಾಂಡಾದ ಶಾಸನದಿಂದ ಅವನ ಹೆಂಡತಿಯ ಹೆಸರು ವೀರಮ್ಮ ಎಂದು ಪೋತಲಕಟ್ಟಿಯ ಕೆರೆಯ ಶಾಸನದಿಂದ ಅಕಪ್ಪ ಅವನ ಇನ್ನೊಬ್ಬ ಮಗ ಎಂದು ತಿಳಿದು ಬರುತ್ತದೆ.

ಅಕ್ಕಪಕ್ಕದ ಹಳ್ಳಿಗಳಲ್ಲಿ ಕ್ಷೇತ್ರಕಾರ್ಯ ಮುಂದು ವರೆಸಿದಾಗ ಬಯಕಾರ ರಾಮಪ್ಪ ಕಟ್ಟಿಸಿದ ಉಳಿದ ಕೆರೆಗಳ ಬಗ್ಗೆ ವಿವರಿಸುವ ಶಾಸನಗಳು ಲಭ್ಯವಾಗುವ ಸಾಧ್ಯತೆ ಇದೆ.

(ಈ ಪ್ರಬಂಧವನ್ನು ಮಂಡಿಸಲಿಕ್ಕೆ ಅನುಮತಿಕೊಟ್ಟ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಬೆಂಗಳೂರು ವಲಯದ ಪುರಾತತ್ವ ಅಧೀಕ್ಷಕರಿಗೆ (ಎಸ್.ಎ.) ನನ್ನ ಕೃತಜ್ಞತೆಗಳು).

3. ಅದೇ, ಸಂ. ೬೬೦
4. ಎ.ಆರ್.ಐ.ಇ., ೧೯೧೪, ಭಾಗ I ಸಂ.ಬಿ ೫೧೪ ಮತ್ತು ೫೧೬.